WPP-47

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಮಾರ್ಚ್ ೨೯, ೨೦೧೨ (ಚೈತ್ರ ೯, ಶಕ ವರ್ಷ ೧೯೩೪) | ಸಂಚಿಕೆ ೧೩ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**FORM-IV**

**(See Rule 12)**

**NOTICE**

It is hereby notified that the undersigned has changed his/her name from **RAVINDRA S/O SHAKARAPPA SHANDAGI TO RAVINDRA A/F TIPPANAGOUDA PATIL**

**PD. c/n.-39** **RAVINDRA S/O SHAKARAPPA SHANDAGI**

**FORM-IV**

**(See Rule 12)**

**NOTICE**

It is hereby notified that the undersigned has changed his/her name from **CHANDRA TO D. CHANDRU**

**PD. c/n.-37** **CHANDRA**

**FORM-IV**

**(See Rule 12)**

**NOTICE**

It is hereby notified that the undersigned has changed his/her name from **R.L. ASHWINI TO R.L. ABHIGNA**

**PD. c/n.-38** **R.L. ASHWINI**

### FORM-I

### (SEE RULE-9)

### Department of Education

### Office of the Deputy Director, Public Instruction, Haveri, Haveri District

### NOTIFICATION

Shri **DYAMANNA.YALLAPPA.HARIJAN** working as **Primary Teacher** in the **Education** Department, **Govt. Primary School, Bisettikoppa,** is permitted to change his name to Shri **DYAMANNA YALLAPPA JIGALORE**

Signature and Designation of the Appointing Authority

**P.D. c/n.-36**

## OFFICE OF THE ADVOCATE-GENERAL FOR KARNATAKA,

**High Court Buildings, Bangalore-560 001**

**CORRIGENDUM**

**No. 214/AG/EST/2011-12, Dated: 19th March 2012**

In this office notification No. 187/AG/EST/2011-12, dated 08-02-2012 published in the Official Gazette dated : 16-02-2012 read with this Office Corrigendum dated 22-02-2012 published in the Official Gazette dated 08-03-2012, the last date was fixed for receiving the Applications for the Posts of Stenographers andTypists as 15-03-2012. However, in view of the public interest, the last date has been extended from 15-03-2012 to **16-04-2012** for receiving the Applications for the said Posts. Please visit our website at **www.advgen.kar.nic.in** for more details.

By order of the Advocate General,

**M. Krishnappa,**
Administrative Officer

## ಅಡ್ವೋಕೇಟ್ ಜನರಲ್‌ರವರ ಕಛೇರಿ,

**ಉಚ್ಛ ನ್ಯಾಯಾಲಯ ಕಟ್ಟಡ, ಬೆಂಗಳೂರು–560 001**

**ತಿದ್ದುಪಡಿ**

**ಸಂಖ್ಯೆ : 214/AG/EST/2011-12, ದಿನಾಂಕ: 19–03–2012**

ಕರ್ನಾಟಕ ರಾಜ್ಯಪತ್ರದಲ್ಲಿ ದಿನಾಂಕ: 16–02–2012ರಲ್ಲಿ ಪ್ರಕಟವಾದ ಈ ಕಛೇರಿಯ ಅಧಿಸೂಚನೆ ಸಂಖ್ಯೆ : 187/ಎಜಿ/ಇಎಸ್‌ಟಿ/2011–12, ದಿನಾಂಕ: 08–02–2012 ಮತ್ತು ರಾಜ್ಯ ಪತ್ರದಲ್ಲಿ ದಿನಾಂಕ: 08–03–2012ರಲ್ಲಿ ಪ್ರಕಟವಾದ ಈ ಕಛೇರಿಯ ದಿನಾಂಕ: 22–02–2012ರ ತಿದ್ದುಪಡಿಯಲ್ಲಿ ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಹುದ್ದೆಗಳಿಗೆ ಅರ್ಜಿ ಸ್ವೀಕರಿಸುವ ದಿನಾಂಕವನ್ನು 15–03–2012 ಎಂದು ನಿಗದಿಪಡಿಸಲಾಗಿತ್ತು. ಆದರೆ ಸಾರ್ವಜನಿಕರ ಹಿತದೃಷ್ಟಿಯಿಂದ ಸದರಿ ಹುದ್ದೆಗಳಿಗೆ ಅರ್ಜಿ ಸ್ವೀಕರಿಸುವ ದಿನಾಂಕವನ್ನು 15–03–2012 ರಿಂದ 16–04–2012ರವರೆಗೆ ವಿಸ್ತರಿಸಲಾಗಿದೆ. ವಿವರಗಳಿಗೆ ಈ ಕಛೇರಿಯ ಅಂತರ್ಜಾಲ **www.advgen.kar.nic.in** ಗೆ ಭೇಟಿ ನೀಡಿ.

ಅಡ್ವೋಕೇಟ್ ಜನರಲ್‌ರವರ ಆದೇಶದ ಮೇರೆಗೆ

**ಎಂ. ಕೃಷ್ಣಪ್ಪ,**
ಆಡಳಿತಾಧಿಕಾರಿ

**ಪಿ.ಆರ್. 59**

## EXECUTIVE DIRECTOR

## BANNERGHATTA BIOLOGICAL PARK, BANNERGHATTA, BANGALORE –560083

**NO. A2/BBP/Feed/CR-1/2011-12 Date : 16/ 03/ 2012**

**RE-TENDER NOTIFICATION**

**Sub :** Tender for Supply chicken, fish and other feeding materials during 2012-13 for the captive carnivore, omnivore wild animals housed in various units of Biological Park, Bannerghatta, Bangalore.

It is hereby notified for the general information of the public that sealed re-tenders are invited and will be received by the Executive Director, Bannerghatta Biological Park, Bannerghatta, Bangalore herein after referred as Tender Inviting Authority from the registered contractors of this office who have registered with by the Bank Guarantee or pledging of FDRs or NSCs for ₹ 1.00 lakh for supply of chicken, fish and other feeding materials for the captive carnivore, omnivore wild animals housed in various units of Bannerghatta Biological Park for the year 2012-13.

Those who have got the required certificates from the competitive authority for the supply of chicken, fish, egg etc are only eligible to participate in tender. The total procurement value put to tender is as against the each item and which may be provisional and may fluctuate. The procedure of calling, scrutinizing and finalizing this tender is as per the provisions stipulated in Karnataka

Transparency in Public Procurement Acts, 1999 and all other relevant procedure laid by the government of Karnataka from time to time The details of each items in approximate quantity corresponding with approximate cost, EMD and tender processing fee is as explained in the below schedule

**S C H E D U L E**

| ***Unit No.*** | ***Particulars of commodity*** | ***Approximate quantity In kgs/Nos*** | ***Approximate cost of the commodities (₹. In lakhs)*** | ***EMD to be furnished (₹ In lakhs)*** |
|---|---|---|---|---|
| 1 | Supply of chicken to Zoo | 4545 kgs | 5.00 | 0.50 |
| 2 | Supply of chicken to Rescue Center | 20000 kgs | 22.00 | 2.20 |
| 3 | Supply of chicken to Safari | 36360 kgs | 40.00 | 4.00 |
| 4 | Supply of fresh water fish to zoo a. Small fish, b. Medium fish | 20000 kgs | 10.00 | 1.00 |
| 5 | a. Supply of Live chicks, | 2500 Nos. | 0.20 | 0.02 |
| | b. Supply of Rabbits | 2120 Nos. | 7.00 | 0.70 |
| 6 | Eggs | 10,000 Nos | 3.50 | 0.35 |
| 7 | Milk | 15,000 Ltr. | 3.00 | 0.30 |

**The scheduled dates and time:**

1. The tender forms will be available in this office of the undersigned during the office hours from **10/ 04/ 2012 to 12/ 04/ 2012** on payment of **Rs. 570.00** (including all taxes) separately for each unit.
2. Last date for receipt of sealed tender forms from **10:00 AM to 3:00 PM on 13/04/2012**. No tender forms will be received after **3:00 P.M on 18/04/2012**
3. Tenders will be opened by the Executive Director, BBP (Tender Inviting Authority) or an authorised officer by him **on 13/04/2012 at 4.00 PM** in presence of the available tenderers.

**Conditions:**

1. The tender accepting authority reserves the right to accept or reject any or all tenders without incurring any liability or obligation to inform the applicants of the reasons for such action.
2. Any tender submitted without the earnest money deposit (EMD) shall summarily rejected unless the any category of tenderers specically exempted by the Government from the payment of earnest money deposit (EMD).
3. Other detailed conditions can be had from the office of the undersigned during the office hours on all working days.

**Executive Director,**
**Bannerghatta Biological Park,**
**Bannerghatta, Bangalore**

## ಕಾರ್ಯನಿರ್ವಾಹಕ ನಿರ್ದೇಶಕರು

## ಬನ್ನೇರುಘಟ್ಟ ಜೈವಿಕ ಉದ್ಯಾನವನ, ಬನ್ನೇರುಘಟ್ಟ, ಬೆಂಗಳೂರು – 560 083

## ಮರು ಟೆಂಡರು ಪ್ರಕಟಣೆ

**ಸಂ. ಎ2/ ಬಬಪಾ/ ಫೀಡ್/ ಸಿಆರ್– 1/2011–12, ದಿನಾಂಕ : 16/ 03/ 2012**

**ವಿಷಯ :** 2012–13 ನೇ ಸಾಲಿನಲ್ಲಿ ಬನ್ನೇರುಘಟ್ಟ ಜೈವಿಕ ಉದ್ಯಾನವನದ ವಿವಿದ ಘಟಕಗಳಲ್ಲಿರುವ ವನ್ಯಪ್ರಾಣಿಗಳಿಗೆ ಕೋಳಿ, ಮೀನು ಮತ್ತು ಇತರೆ ಆಹಾರ ಪದಾರ್ಥಗಳನ್ನು ಸರಬರಾಜು ಮಾಡುವ ಮರು ಟೆಂಡರ್ ಬಗ್ಗೆ

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, 2012–13 ನೇ ಸಾಲಿನಲ್ಲಿ ಬನ್ನೇರುಘಟ್ಟ ಜೈವಿಕ ಉದ್ಯಾನವನದಲ್ಲಿರುವ ವನ್ಯಪ್ರಾಣಿಗಳಿಗೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವಂತೆ ಕೋಳಿ, ಮೀನು ಮತ್ತು ಇತರೆ ಆಹಾರ ಪದಾರ್ಥಗಳನ್ನು ಸರಬರಾಜು ಮಾಡುವ ಬಗ್ಗೆ ಮೊಹರಾದ ಲಕೋಟೆಯಲ್ಲಿ ಕಾರ್ಯನಿರ್ವಾಹಕ ನಿರ್ದೇಶಕರು, ಬನ್ನೇರುಘಟ್ಟ ಜೈವಿಕ ಉದ್ಯಾನವನ ರವರಿಂದ ಟೆಂಡರನ್ನು ಕರೆಯಲಾಗಿದೆ. ಟೆಂಡರ್‌ದಾರರು ಬನ್ನೇರುಘಟ್ಟ ಜೈವಿಕ ಉದ್ಯಾನವನದಲ್ಲಿ ರೂ. 1.00 ಲಕ್ಷ ರೂಗಳ ಬ್ಯಾಂಕ್ ಗ್ಯಾರಂಟಿ/ FDRs/NSCs ಸಲ್ಲಿಸಿ ನೊಂದಣೆ ಮಾಡಿರುವ ಗುತ್ತಿಗೆದಾರರಾಗಿರಬೇಕು ಹಾಗು ಕೋಳಿ, ಮೀನು ಮೊಟ್ಟೆ ಇತ್ಯಾದಿ ಗಳನ್ನು ಸರಬರಾಜು ಮಾಡಲು, ಸಂಬಂದಪಟ್ಟ ಪ್ರಾಧಿಕಾರದಿಂದ ಮಾರಾಟ ದೃಡೀಕರಣ ಪತ್ರವನ್ನು ಹೊಂದಿರಬೇಕು. ಟೆಂಡರಿಗೆ ನಿಗಧಿಪಡಿಸಿದ ಮೊತ್ತ ಮತ್ತು ತೂಕ ಅಂದಾಜು ಆಗಿದ್ದು, ಅವುಗಳು ಬದಲಾವಣೆಗಳಾಗುವ ಸಾಧ್ಯತೆ ಇರಬಹುದಾಗಿರುತ್ತದೆ. ಟೆಂಡರ್ ಷೆಡ್ಯೂಲ್‌ನ ವಿವರಗಳು ಈ ಕೆಳಗೆ ನಮೂದಿಸಿರುವಂತೆ ಇದೆ.

**ಷೆಡ್ಯೂಲ್**

| ಘಟಕ ಸಂಖ್ಯೆ | ವಿವರಗಳು | ಅಂದಾಜು ತೂಕ | ಟೆಂಡರಿಗೆ ಇಡಲಾದ ಆಹಾರ ಪದಾರ್ಥಗಳ ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) | ಸಲ್ಲಿಸಬೇಕಾದ ಇ.ಎಂ.ಡಿ ಹಣ (ರೂ. ಲಕ್ಷಗಳಲ್ಲಿ) |
|---|---|---|---|---|
| 1 | ಮೃಗಾಲಯಕ್ಕೆ ಕೋಳಿ ಮಾಂಸ ಸರಬರಾಜು ಮಾಡುವುದು | 4545 ಕೆಜಿ | 5.00 | 0.50 |
| 2 | ಪುನರ್ವಸತಿ ಕೇಂದ್ರಕ್ಕೆ ಕೋಳಿ ಮಾಂಸ ಸರಬರಾಜು ಮಾಡುವುದು | 20000 ಕೆಜಿ | 22.00 | 2.20 |
| 3 | ಸಫಾರಿ ಪ್ರಾಣಿಗಳಿಗೆ ಕೋಳಿ ಮಾಂಸ ಸರಬರಾಜು ಮಾಡುವುದು | 36360 ಕೆಜಿ | 40.00 | 4.00 |
| 4 | ಮೃಗಾಲಯಕ್ಕೆ ಮೀನು ಸರಬರಾಜು ಮಾಡುವುದು | 20000 ಕೆಜಿ | 10.00 | 1.00 |
| 5 | ಅ.) ಕೋಳಿ ಮರಿ ಗಳನ್ನು ಸರಬರಾಜು ಮಾಡುವುದು | 2500 ಸಂಖ್ಯೆ | 0.20 | 0.02 |
| | ಆ.) ಮೊಲಗಳನ್ನು ಸರಬರಾಜು ಮಾಡುವುದು | 2120 ಸಂಖ್ಯೆ | 7.00 | 0.70 |
| 6 | ಮೊಟ್ಟೆ ಸರಬರಾಜು | 10,000 ಸಂಖ್ಯೆ | 3.50 | 0.35 |
| 7 | ಹಾಲು ಸರಬರಾಜು ಮಾಡುವುದು | 15,000 ಲೀಟರ್ | 3.00 | 0.30 |

**ಷೆಡ್ಯೂಲ್ ದಿನಾಂಕ ಮತ್ತು ಸಮಯ:**

1. ಗುತ್ತಿಗೆದಾರರು ಪ್ರತಿಯೊಂದು ಘಟಕಕ್ಕೆ ಪ್ರತ್ಯೇಕವಾದ ಟೆಂಡರ್ ಫಾರಂಗಳನ್ನು ನಿಗದಿಪಡಿಸಲಾದ ಟೆಂಡರ್ ಫಾರಂ ಶುಲ್ಕ **ರೂ. 570/– (ತೆರಿಗೆಗಳು ಸೇರಿ)** ಹಣ ಪಾವತಿಸಿ ದಿನಾಂಕ: **10/04/2012 ರಿಂದ 12/04/2012 ರವರೆಗೂ** ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

2. ಮೊಹರಾದ ಟೆಂಡರ್‌ಗಳನ್ನು **ದಿನಾಂಕ: 13–04–2012 ರ ಬೆಳಿಗ್ಗೆ 10 ಗಂಟೆಯಿಂದ ಸಾಯಂಕಾಲ 3.00** ವರೆಗೆ ಸ್ವೀಕರಿಸಲಾಗುವುದು ಹಾಗೂ **ಸಾಯಂಕಾಲ 3.00** ಘಂಟೆಯ ನಂತರ ಸಲ್ಲಿಸಿದ ಮೋಹರಾದ ಟೆಂಡರ್ ಫಾರಂಗಳನ್ನು ಯಾವುದೇ ಕಾರಣದಿಂದ ಸ್ವೀಕರಿಸಲಾಗುವುದಿಲ್ಲ.

3. ಮೊಹರಾದ ಟೆಂಡರ್ ಲಕೋಟೆಯನ್ನು **ದಿನಾಂಕ: 13–04–2012 ರಂದು ಸಾಯಂಕಾಲ 4.00** ಘಂಟೆಗೆ ಟೆಂಡರ್‌ದಾರರ ಸಮ್ಮುಖದಲ್ಲಿ ಕಾರ್ಯನಿರ್ವಾಹಕ ನಿರ್ದೇಶಕರು ಅಥವಾ ಅವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟ ಅಧಿಕಾರಿಗಳು ಟೆಂಡರನ್ನು ತೆರೆಯುವರು

**ಷರತ್ತುಗಳು:–**

1. ಟೆಂಡರ್ ಅಂಗೀಕರಿಸುವ ಪ್ರಾಧಿಕಾರವು ಟೆಂಡರುದಾರರಿಗೆ ಯಾವುದೇ ಸಕಾರಣಗಳನ್ನು ನೀಡದೇ ಟೆಂಡರ್‌ಗಳನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಹೊಂದಿರುತ್ತದೆ.
2. ಯಾವುದೇ ಟೆಂಡರಿಗೆ ಇಡಗಂಟು ಸಲ್ಲಿಸದೇ ಇದ್ದರೆ ಅದನ್ನು ತಿರಸ್ಕರಿಸಲಾಗುದು. ಆದರೆ ಟೆಂಡರಿಗೆ ಇಡಗಂಟು ಸಲ್ಲಿಸಲು ಸರ್ಕಾರದಿಂದ ರಿಯಾಯಿತಿ ಪಡೆದಿದ್ದರೆ ಟೆಂಡರನ್ನು ಪರಿಗಣಿಸಲಾಗುವುದು.
3. ಟೆಂಡರ್ ವಿಷಯದಲ್ಲಿ ಯಾವುದೇ ವಿವರಗಳು/ಷರತ್ತುಗಳು/ ಸ್ಪಷ್ಟೀಕರಣವನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ನೆರವಾಗಿ ಬಂದು ಪಡೆಯಬಹುದು.

**ಕಾರ್ಯನಿರ್ವಾಹಕ ನಿರ್ದೇಶಕರು,**
ಬನ್ನೇರುಘಟ್ಟ ಜೈವಿಕ ಉದ್ಯಾನವನ,
ಬನ್ನೇರುಘಟ್ಟ, ಬೆಂಗಳೂರು

**ಪಿ.ಡಿ. 33**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು–560 009.

**(ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಕಿರಿಯ ಆರೋಗ್ಯ ಸಹಾಯಕರು(ಪುರುಷ) & ಫಾರ್ಮಸಿಸ್ಟ್ ಬ್ಯಾಕ್‌ಲಾಗ್ ಹುದ್ದೆಗಳಿಗೆ ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡದ ಅಭ್ಯರ್ಥಿಗಳ ಆಯ್ಕೆ/ನೇಮಕಾತಿ**

**ಅಧಿಸೂಚನೆ**

**ಸಂಖ್ಯೆ:ಎಸ್‌ಆರ್‌ಸಿ/14/2011–12, ದಿನಾಂಕ:29.03.2012**

**ಅರ್ಜಿಗಳನ್ನು ಆನ್–ಲೈನ್ ಮೂಲಕ ಸಲ್ಲಿಸಲು ಕೊನೆಯ ದಿನಾಂಕ.30.04.2012**

**ಬ್ಯಾಂಕ್‌ನಲ್ಲಿ ಅರ್ಜಿ ಶುಲ್ಕ ಪಾವತಿಸಲು ಕೊನೆಯ ದಿನಾಂಕ:02.05.2012**

**ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡದ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸಬೇಕು**

ಸರ್ಕಾರಿ ಅಧಿಸೂಚನೆ ಸಂಖ್ಯೆ:ಡಿಪಿಎಆರ್/13/ಎಸ್‌ಬಿಸಿ/2001, ದಿನಾಂಕ:21.11.2001ಕ್ಕೆ ಅನುಗುಣವಾಗಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಅರೆ ವೈದ್ಯಕೀಯ ಗ್ರೂಪ್'ಸಿ' ವೃಂದದ ಕಿರಿಯ ಆರೋಗ್ಯ ಸಹಾಯಕರು(ಪುರುಷ) & ಫಾರ್ಮಸಿಸ್ಟ್, ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡಗಳಿಗೆ ಮೀಸಲಿರಿಸಿದ್ದ ಹಾಗೂ ಭರ್ತಿಯಾಗದೆ ಖಾಲಿ ಉಳಿದಿರುವ ಹುದ್ದೆಗಳು (ವಿಶೇಷ ನೇಮಕಾತಿ) ನಿಯಮಗಳು 2001ರಲ್ಲಿ ನಿಗದಿಪಡಿಸಿರುವಂತೆ ಅರ್ಹತೆ ಮತ್ತು ಮೀಸಲಾತಿ ಆಧಾರದ ಮೇಲೆ ಈ ಕೆಳಕಂಡ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅರ್ಜಿಯನ್ನು **ವೆಬ್‌ಸೈಟ್ ವಿಳಾಸ www.karhfw.gov.in** ನಲ್ಲಿ **ON-LINE** ಮುಖಾಂತರ ಆಹ್ವಾನಿಸಲಾಗಿದೆ.

**ಕಿರಿಯ ಆರೋಗ್ಯ ಸಹಾಯಕರು (ಪುರುಷ)–107 ಹುದ್ದೆಗಳು**

| ಪ್ರವರ್ಗ | ಸಾಮಾನ್ಯ | ಮಹಿಳಾ | ಗ್ರಾಮೀಣ | ಮಾಜಿ ಯೋಧರು | ಕನ್ನಡ ಮಾಧ್ಯಮ | ಯೋಜನಾ ಸಂತ್ರಸ್ಥರು | ಅಂಗವಿಕಲರು | ಒಟ್ಟು |
|---|---|---|---|---|---|---|---|---|
| ಪ.ಜಾತಿ | 13 | 19 | 16 | 6 | 3 | 3 | 4 | 64 |
| ಪ.ಪಂಗಡ | 9 | 13 | 11 | 4 | 2 | 2 | 2 | 43 |
| **ಒಟ್ಟು** | **22** | **32** | **27** | **10** | **5** | **5** | **6** | **107** |

**ಫಾರ್ಮಸಿಸ್ಟ್–16 ಹುದ್ದೆಗಳು**

| ಪ್ರವರ್ಗ | ಸಾಮಾನ್ಯ | ಮಹಿಳಾ | ಗ್ರಾಮೀಣ | ಮಾಜಿ ಯೋಧರು | ಕನ್ನಡ ಮಾಧ್ಯಮ | ಯೋಜನಾ ಸಂತ್ರಸ್ಥರು | ಅಂಗವಿಕಲರು | ಒಟ್ಟು |
|---|---|---|---|---|---|---|---|---|
| ಪ.ಜಾತಿ | 3 | 5 | 5 | 1 | 1 | – | 1 | 16 |
| ಪ.ಪಂಗಡ | – | – | – | – | – | – | – | – |
| **ಒಟ್ಟು** | **3** | **5** | **5** | **1** | **1** | **–** | **1** | **16** |

1. ಪ್ರಕಟಿಸಿರುವ ಹುದ್ದೆಗಳಿಗೆ ನಿಗದಿಪಡಿಸಿರುವ ವಿದ್ಯಾರ್ಹತೆ, ವಯೋಮಿತಿ, ಮೀಸಲಾತಿ ಇತ್ಯಾದಿ ವಿವರಗಳ ಪ್ರಮಾಣ ಪತ್ರ/ದಾಖಲೆಗಳನ್ನು ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಮೊದಲು ಅಭ್ಯರ್ಥಿಗಳು ಹೊಂದಿರಬೇಕು.

**ವಿಶೇಷ ಸೂಚನೆ**:– ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚಿನ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಇಚ್ಛಿಸಿದ್ದಲ್ಲಿ, ಅಂತಹ ಅಭ್ಯರ್ಥಿಗಳು ಪ್ರತಿ ಹುದ್ದೆಗೆ ಪ್ರತ್ಯೇಕವಾಗಿ ಅರ್ಜಿ ಸಲ್ಲಿಸಿ ಶುಲ್ಕವನ್ನು ಪಾವತಿಸತಕ್ಕದ್ದು.

2. **ಶುಲ್ಕ**: ಶುಲ್ಕ ಪಾವತಿಸಬೇಕಾದ ವಿಧಾನ ಹಾಗೂ ಸ್ಥಳದ ವಿವರ :–

| | |
|---|---|
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ | ₹ 100/– |

**ಅರ್ಹತಾ ಷರತ್ತುಗಳು:–**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

ಇ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

ಈ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

ನಿಗದಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

3. **ಪದನಾಮ, ವೇತನ ಶ್ರೇಣಿ, ಹುದ್ದೆಗಳ ಸಂಖ್ಯೆ, ನಿಗದಿಪಡಿಸಿರುವ ವಿದ್ಯಾರ್ಹತೆ, ತರಬೇತಿ ಮತ್ತು ವಯೋಮಿತಿ ವಿವರ ಈ ಕೆಳಕಂಡಂತೆ**

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ ವೇತನ ಶ್ರೇಣಿ ಮತ್ತು ಒಟ್ಟು ಹುದ್ದೆಗಳು | ನಿಗದಿಪಡಿಸಿರುವ ಕನಿಷ್ಠ ವಿದ್ಯಾರ್ಹತೆ | ವಯೋಮಿತಿ & ಆಯ್ಕೆವಿಧಾನ |
|---|---|---|---|
| 1 | 2 | 3 | 4 |
| 1 | ಕಿರಿಯ ಆರೋಗ್ಯ ಸಹಾಯಕ (ಪುರುಷ) (ರೂ. 6250–125–6500–150–7100–175–7800–200–8600–225–9500–250–10500–300–12000) (ಪ.ಜಾ–64 ಹುದ್ದೆಗಳು) (ಪ.ಪಂ.43 ಹುದ್ದೆಗಳು) | 1).ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು ಮತ್ತು ವಿವಿದೋದ್ದೇಶ ಮೂಲ ಆರೋಗ್ಯ ಕಾರ್ಯಕರ್ತರ ತರಬೇತಿ ಪಡೆದಿರಬೇಕು.<br>ಅಥವಾ<br>2).ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು ಮತ್ತು ಎರಡು ವರ್ಷದ ಕರ್ನಾಟಕ ವೊಕೇಷನಲ್ ಬೋರ್ಡ್‌ನ ಆರೋಗ್ಯ ನಿರೀಕ್ಷಕರ ಡಿಪ್ಲಮಾ ದಲ್ಲಿ ತರಬೇತಿ ಪಡೆದಿರಬೇಕು.<br>ಅಥವಾ<br>3).ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು ಮತ್ತು ಕರ್ನಾಟಕ ಅರೆ ವೈದ್ಯಕೀಯ ಮಂಡಳಿ ನಡೆಸುವ ಮೂರು ವರ್ಷಗಳ ಆರೋಗ್ಯ ನಿರೀಕ್ಷಕರ ಡಿಪ್ಲಮಾ ಹೊಂದಿರಬೇಕು<br>ಅಥವಾ | ಕನಿಷ್ಠ :–18 ವರ್ಷ<br>ಗರಿಷ್ಠ. ಪಜಾ/ಪ.ಪಂ/40 ವರ್ಷ<br>ಅ) ಎಸ್.ಎಸ್.ಎಲ್.ಸಿಯಲ್ಲಿ ಒಟ್ಟು ಶೇಕಡವಾರು +ವಿವಿದೋದ್ದೇಶ ಮೂಲ ಆರೋಗ್ಯ ಕಾರ್ಯಕರ್ತರ ತರಬೇತಿಯಲ್ಲಿ ಪಡೆದ ಒಟ್ಟು ಶೇಕಡವಾರು=ಒಟ್ಟು 2 ರಲ್ಲಿ ಭಾಗಿಸಿ=%<br>ಆ) ಎಸ್.ಎಸ್.ಎಲ್.ಸಿಯಲ್ಲಿ ಒಟ್ಟು ಶೇಕಡವಾರು + ಎರಡು ವರ್ಷದ ಕರ್ನಾಟಕ ವೊಕೇಷನಲ್ ಬೋರ್ಡ್‌ನ ಆರೋಗ್ಯ ನಿರೀಕ್ಷಕರ ಡಿಪ್ಲಮಾದಲ್ಲಿ ಪಡೆದ ಒಟ್ಟು ಶೇಕಡವಾರು=ಒಟ್ಟು 2 ರಲ್ಲಿ ಭಾಗಿಸಿ=%<br>ಇ) ಎಸ್.ಎಸ್.ಎಲ್.ಸಿಯಲ್ಲಿ ಒಟ್ಟು ಶೇಕಡವಾರು + ಎರಡು ವರ್ಷದ ಕರ್ನಾಟಕ ಅರೆ ವೈದ್ಯಕೀಯ ಮಂಡಳಿ ನಡೆಸುವ ಮೂರು ವರ್ಷಗಳ ಆರೋಗ್ಯ ನಿರೀಕ್ಷಕರ ಡಿಪ್ಲಮಾದಲ್ಲಿ ಪಡೆದ ಒಟ್ಟು ಶೇಕಡವಾರು=ಒಟ್ಟು 2 ರಲ್ಲಿ ಭಾಗಿಸಿ=% |

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ ವೇತನ ಶ್ರೇಣಿ ಮತ್ತು ಒಟ್ಟು ಹುದ್ದೆಗಳು | ನಿಗದಿಪಡಿಸಿರುವ ಕನಿಷ್ಠ ವಿದ್ಯಾರ್ಹತೆ | ವಯೋಮಿತಿ & ಆಯ್ಕೆವಿಧಾನ |
|---|---|---|---|
| 1 | 2 | 3 | 4 |
| | | 4).ಪಿ.ಯು.ಸಿ (ವಿಜ್ಞಾನ)ಯಲ್ಲಿ ತೇರ್ಗಡೆ ಮತ್ತು ಕರ್ನಾಟಕ ಅರೆವೈದ್ಯಕೀಯ ಮಂಡಳಿಯು ನಡೆಸುವ ಎರಡು ವರ್ಷದ ಆರೋಗ್ಯ ನಿರೀಕ್ಷಕರ ಡಿಪ್ಲೋಮ ಹೊಂದಿರಬೇಕು. | ಇ) ಪಿ.ಯು.ಸಿ (ವಿಜ್ಞಾನ)ದಲ್ಲಿ ಒಟ್ಟು ಶೇಕಡವಾರು + ಎರಡು ವರ್ಷದ ಕರ್ನಾಟಕ ಅರೆ ವೈದ್ಯಕೀಯ ಮಂಡಳಿ ನಡೆಸುವ ಎರಡು ವರ್ಷಗಳ ಆರೋಗ್ಯ ನಿರೀಕ್ಷಕರ ಡಿಪ್ಲಮಾದಲ್ಲಿ ಪಡೆದ ಒಟ್ಟು ಶೇಕಡವಾರು=ಒಟ್ಟು 2 ರಲ್ಲಿ ಭಾಗಿಸಿ=% |
| 2 | ಫಾರ್ಮಸಿಸ್ಟ್ (ರೂ. 7275–175–7800–200–8600–225–9500–250–10500–300–12300–350–13350)<br><br>(ಪ.ಜಾ–16 ಹುದ್ದೆಗಳು) | ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು ಮತ್ತು ಕರ್ನಾಟಕ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ಸಂಸ್ಥೆಯಿಂದ ಫಾರ್ಮಸಿ ಡಿಪ್ಲಮಾ ಹೊಂದಿರಬೇಕು | ಕನಿಷ್ಠ: 18 ವರ್ಷ<br>ಗರಿಷ್ಠ: ಪಜಾ/ಪ.ಪಂ–40<br><br>ಎಸ್.ಎಸ್.ಎಲ್.ಸಿಯಲ್ಲಿ ಒಟ್ಟು ಶೇಕಡವಾರು + ಫಾರ್ಮಸಿ ಡಿಪ್ಲಮಾದಲ್ಲಿ ಪಡೆದ ಒಟ್ಟು ಶೇಕಡವಾರು=ಒಟ್ಟು 2 ರಲ್ಲಿ ಭಾಗಿಸಿ=% |

**ವಯೋಮಿತಿ:–** ಭರ್ತಿ ಮಾಡಿದ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕಕ್ಕೆ ಕನಿಷ್ಠ 18 ವರ್ಷಗಳು ಗರಿಷ್ಠ 40 ವರ್ಷಗಳನ್ನು ಮೀರಿರಬಾರದು. ವಿಶೇಷ ನೇಮಕಾತಿ ನಿಯಮಗಳನ್ವಯ 29 ವರ್ಷ ಪೂರ್ಣಗೊಳಿಸಿರುವ ಅಭ್ಯರ್ಥಿಗಳನ್ನು ಮಾತ್ರ ಆಯ್ಕೆಗೆ ಪರಿಗಣಿಸಲಾಗುವುದು. 29 ರಿಂದ 40 ವರ್ಷಗಳ ವಯಸ್ಸಿನ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಾಗ ಮಾತ್ರ 18 ರಿಂದ 29 ವರ್ಷ ವಯಸ್ಸಿನ ಅಭ್ಯರ್ಥಿಗಳನ್ನು ಪರಿಗಣಿಸಲಾಗುವುದು.

4. **ಶೈಕ್ಷಣಿಕ ವಿದ್ಯಾರ್ಹತೆ:** ಅರ್ಜಿಗಳನ್ನು ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅನುಸೂಚಿಯಲ್ಲಿ ಅಧಿಸೂಚಿಸಿದ ಹುದ್ದೆಯ ಮುಂದೆ ಸೂಚಿಸಿರುವ ವಿದ್ಯಾರ್ಹತೆಯನ್ನು ಅಭ್ಯರ್ಥಿಗಳು ಖಡ್ಡಾಯವಾಗಿ ಹೊಂದಿರಬೇಕು. ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಅಭ್ಯರ್ಥಿಗಳು ಅರ್ಜಿಯಲ್ಲಿ ಸ್ಪಷ್ಟವಾಗಿ ನಮೂದಿಸಬೇಕು.

(ಅ) ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಆಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

(ಆ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

**ವಿವರಣೆ:–** (1) ಮಾಜಿ ಸೈನಿಕ ಎಂದರೆ ಕೇಂದ್ರ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯು ದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧನಲ್ಲದ) ಸೇವೆ ಸಲ್ಲಿಸಿದ ವ್ಯಕ್ತಿ ಆದರೆ ಡಿಫೆನ್ಸ್ ಸೆಕ್ಯೂರಿಟಿ ಕೋರ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್, ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ. ಮತ್ತು

(2) ಕೇಂದ್ರ ಸಶಸ್ತ್ರ ದಳಗಳಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರುಗಳಿಗೆ ವಯೋಮಿತಿ ಸಡಿಲಿಕೆಯನ್ನು ನೀಡಲಾಗುವುದಿಲ್ಲ.

ಅ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

ಅಥವಾ

ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಿಂದ ಬಿಡುಗಡೆಯಾದವನು.

ಅಥವಾ

ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

ಅಥವಾ

ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು:–

i) ನಿರಂತರ ಸೇವೆ ಸಲ್ಲಿಸಿದ ನಿವೃತ್ತಿ ಹೊಂದಿದ ಪಿಂಚಣಿದಾರರು.

ii) ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.

iii) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

**ವಿವರಣೆ**:– ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆಯಲ್ಲಿರುವ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ನಿರ್ದಿಷ್ಟ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

(ಇ)ಅಭ್ಯರ್ಥಿಗಳು ನ್ಯಾಷನಲ್ ಕ್ಯಾಡಿಟ್ ಕೋರ್‌ನಲ್ಲಿ ಪೂರ್ಣಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ

ವ್ಯಕ್ತಿಯಾಗಿದ್ದರೆ ಅಂಥ ಕ್ಯಾಡೆಟ್ ಪರಿವೀಕ್ಷನಾಗಿ ಅವನು ಸೇವೆ ಸಲ್ಲಿಸಿದಷ್ಟು ವರ್ಷಗಳು.

(ಈ) ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡ ಗ್ರಾಮ ಸಮೂಹ ಪರಿಶೀಲಕರಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಪಕ್ಷದಲ್ಲಿ ಅವನು / ಅವಳು ಅಂತಹ ಗ್ರಾಮ ಪರಿಶೀಲಕರಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.

(ಉ) ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು

(ಊ) ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಆವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 5 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು

(ಋ) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು. (ಮರು ಮದುವೆಯಾಗಿಲ್ಲ ಎಂಬುದಾಗಿ ತಹಶೀಲ್ದಾರರಿಂದ ಪ್ರಮಾಣ ಪತ್ರ ಪಡೆದಿರತಕ್ಕದ್ದು.

**5. ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು :–**

ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ಈ ಕೆಳಗೆ ನಮೂದಿಸಿರುವ ನಮೂನೆಗಳಲ್ಲಿಯೇ ಮೀಸಲಾತಿ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು:–

ಅ) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು:– ನಮೂನೆ 'ಡಿ'

ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಿತ ತಹಸೀಲ್ದಾರ್‌ರವರಿಂದ ಪಡೆದಿಟ್ಟುಕೊಂಡಿರತಕ್ಕದ್ದು. ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಈ ಸೂಚನೆಗಳಲ್ಲಿ ತೋರಿಸಲಾಗಿದೆ. ಈ ನಮೂನೆಗಳನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಗಳಲ್ಲಿ ಸಲ್ಲಿಸಲ್ಪಡುವ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು. ಅರ್ಜಿ

ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು. ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದು ಹಾಗೂ ಅದೇ ಪ್ರಮಾಣ ಪತ್ರವನ್ನು ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ಹಾಜರುಪಡಿಸತಕ್ಕದ್ದು (ಅನುಬಂಧ–1).

**6. <u>ಗ್ರಾಮೀಣ ಅಭ್ಯರ್ಥಿ</u>**

ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 08 ಸೆನೆನಿ 2001 ದಿನಾಂಕ 13–02–2001 ರನ್ವಯ ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ 1 ರಿಂದ 10ನೇ ತರಗತಿಯವರೆಗೆ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರಗಳಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಖಡ್ಡಾಯವಾಗಿ ಮೇಲು ಸಹಿ ಮಾಡಿಸಿರಬೇಕು. ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು. ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಇತರೆ ನಮೂನೆಗಳಲ್ಲಿ ಸಲ್ಲಿಸಲ್ಪಡುವ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು ಹಾಗೂ ಅಂತಹವರು ಗ್ರಾಮೀಣ ಮೀಸಲಾತಿಗೆ ಸಹ ಅನರ್ಹರಾಗುತ್ತಾರೆ. ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಈ ಸೂಚನೆಗಳಿಗೆ ಅನುಬಂಧಿಸಲಾಗಿದೆ (ಅನುಬಂಧ–2).

**7. <u>ಕನ್ನಡ ಮಾಧ್ಯಮ ಅಭ್ಯರ್ಥಿ</u>**

ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಆಸುಇ 71 ಸೆನೆನಿ 2001 ದಿನಾಂಕ 24–10–2002 ರನ್ವಯ ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು. ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಈ ಪ್ರಮಾಣ ಪತ್ರದ ನಮೂನೆಯನ್ನು ಈ ಸೂಚನೆಗಳಿಗೆ ಅನುಬಂಧಿಸಲಾಗಿದೆ (ಅನುಬಂಧ–3)

**8. <u>ಅಂಗವಿಕಲ ಅಭ್ಯರ್ಥಿ</u>**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 50 ಎಸ್‌ಆರ್‌ಆರ್ 2000 ದಿನಾಂಕ 03–09–2005 ರಲ್ಲಿ ರಾಜ್ಯ ಸಿವಿಲ್ ಸೇವೆಗಳ ಸಮೂಹ – 'ಎ' ಮತ್ತು 'ಬಿ' ಗುಂಪಿನ ಹುದ್ದೆಗಳಿಗೆ ಶೇಕಡ 3 ರಷ್ಟು (ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 21 ಎಸ್‌ಆರ್‌ಆರ್ 2008 ದಿನಾಂಕ 03–08–2009ರ ಅನುಸೂಚಿಯಡಿ ಸೇರ್ಪಡೆ ಮಾಡಲಾಗಿರುವ ಇಲಾಖೆಗಳು) ಮತ್ತು ಸಮೂಹ 'ಸಿ' ಗುಂಪಿನ ಹುದ್ದೆಗಳಿಗೆ ಶೇಕಡ 5 ರಷ್ಟು (ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 52 ಎಸ್‌ಆರ್‌ಆರ್ 99 ದಿನಾಂಕ 29–11–2002ರ ಅನುಸೂಚಿಯಡಿ ಸೇರ್ಪಡಿಸಲಾಗಿರುವ ಇಲಾಖೆಗಳು) ಹುದ್ದೆಗಳನ್ನು ಅಂಗವಿಕಲರಿಗೆ ಮೀಸಲಾತಿ ಕಲ್ಪಿಸಿದ್ದು, ಇದರನ್ವಯ ಶೇಕಡ 40 ಕ್ಕಿಂತ ಕಡಿಮೆ ಇಲ್ಲದಂತಹ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ಮಾತ್ರ ಈ ಮೀಸಲಾತಿಯನ್ನು ಕೋರಲು ಅರ್ಹರು. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ ಸಿಆಸುಇ 115 ಸೆನೆನಿ 2005 ದಿನಾಂಕ 19–11–2005ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆ ಬಗ್ಗೆ **ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು** ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. ಇತರೆ ಯಾವುದೇ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು / ಗುರುತಿನ ಚೀಟಿಯ ಪ್ರತಿಗಳನ್ನು ಪರಿಗಣಿಸಲು ಬರುವುದಿಲ್ಲ. ಈ ಪ್ರಮಾಣ ಪತ್ರದ ನಮೂನೆಯನ್ನು ಈ ಸೂಚನೆಗಳಿಗೆ ಅನುಬಂಧಿಸಲಾಗಿದೆ (ಅನುಬಂಧ–4).

(ಎ) ಅರ್ಹ ಅಭ್ಯರ್ಥಿಗಳಿಗೆ ಮೂಲ ದಾಖಲಾತಿ ಪರಿಶೀಲನೆಗೆ ಹಾಜರಾಗುವ ಪತ್ರವನ್ನು ಅಂಚೆ ಮೂಲಕ ಕಳುಹಿಸಲಾಗುವುದು. ಸದರಿ ಪತ್ರವು ಸ್ವೀಕರಿಸದೆ ಇದ್ದಲ್ಲಿ ಅಂತರ್ಜಾಲದಲ್ಲಿ ಬಿತರಿಸಲಾಗುವ ಪ್ರತಿಯನ್ನು ಡೌನ್‌ಲೋಡ್ ಮಾಡಿಕೊಂಡು ನಿಗದಿತ ದಿನಾಂಕದಂದು ಹಾಜರಾಗತಕ್ಕದ್ದು.

**9. <u>ಯೋಜನಾ ನಿರಾಶ್ರಿತ ಅಭ್ಯರ್ಥಿ</u>**

ಸರ್ಕಾರಿ ಆದೇಶ ಡಿಪಿಎಆರ್ 23 ಎಸ್.ಆರ್.ಆರ್. 99 ದಿ:23–11–00ರಂತೆ ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿಆಸುಇ 44 ಸೇನೇನಿ ದಿನಾಂಕ 27–07–2001 ರಲ್ಲಿ ನಿಗದಿಪಡಿಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಂಬಂಧಿಸಿದ ತಹಶೀಲ್ದಾರ್ ರವರಿಂದ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು (ಅನುಬಂಧ–5)

10. <u>ವ್ಯಾಸಂಗ ಪ್ರಮಾಣ ಪತ್ರದ ಬಗ್ಗೆ</u>

ಕರ್ನಾಟಕ ರಾಜ್ಯದಲ್ಲಿ ಹತ್ತು ವರ್ಷಗಳಿಗೆ ಕಡಿಮೆ ಇಲ್ಲದಂತೆ ಅಂದರೆ ಒಂದನೇ ತರಗತಿಯಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡದಿರುವ ಯಾವುದೇ ಅಭ್ಯರ್ಥಿಯು ಈ ನಿಯಮಗಳ ಅಡಿಯಲ್ಲಿ ಆಯ್ಕೆಗೆ ಅರ್ಹರಾಗುವುದಿಲ್ಲ. ಅಭ್ಯರ್ಥಿಗಳು 10 ವರ್ಷ ಕರ್ನಾಟಕ ರಾಜ್ಯದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಭಂದಪಟ್ಟ ಶಾಲೆಗಳ ಮುಖ್ಯೋಪಾಧ್ಯಾಯರಿಂದ ಪ್ರಮಾಣ ಪತ್ರಗಳನ್ನು ಪಡೆದು ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಲಾಗಿರುವ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು.

11. <u>ಸರ್ಕಾರಿ ಸೇವೆಯಲ್ಲಿರುವ ನೌಕರರಿಗೆ</u>

ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಆಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ನೌಕರರು (ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಇಲಾಖೆಯಿಂದ ಪಡೆದಿಟ್ಟುಕೊಂಡಿರತಕ್ಕದ್ದು) ಅನುಬಂಧ–6.

12. <u>ವಿಶೇಷ ಸೂಚನೆಗಳು</u>:–

1) ಹುದ್ದೆಗೆ ನಿಗದಿಪಡಿಸಿದ ಶುಲ್ಕ (ಅರ್ಜಿಯನ್ನು ಭರ್ತಿ ಮಾಡಿದ ನಂತರ ಪಾವತಿಸತಕ್ಕದ್ದು) ಪಾವತಿ ರಸೀತಿ.

2) ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ ಅಂಕಪಟ್ಟಿಗಳು.

3) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ / ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗ.

4) ನಿರಾಪೇಕ್ಷಣಾ ಪತ್ರ (**No Objection Certificate**)(ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳಿಗೆ)

5) ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ / ಮಾಜಿ ಸೈನಿಕ ಅವಲಂಬಿತರಾಗಿದ್ದಲ್ಲಿ, ಮಾಜಿ ಸೈನಿಕರು ಬಿಡುಗಡೆ ಹೊಂದಿರುವ ಕಾರಣಗಳ ಪ್ರಮಾಣ ಪತ್ರ (ಮಾಜಿ ಸೈನಿಕರು ಸೇವೆಯಲ್ಲಿರುವಾಗ ಮೃತಪಟ್ಟಿದ್ದಲ್ಲಿ ಅಥವಾ ಖಾಯಂ ಆಗಿ ಗಾಯಗೊಂಡಿರುವ ಪ್ರಮಾಣ ಪತ್ರ) (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ)

6) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಗಳಲ್ಲಿ.

7) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)

8) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)

9) ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ವಯೋಮಿತಿ ಸಡಿಲಿಕೆಗಾಗಿ ಮೀಸಲಾತಿ ಕೋರಿದ್ದಲ್ಲಿ)

13. **<u>ದುರ್ನಡತೆ</u>:–** ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಅನುಸರಿಸಲು ಪ್ರಯತ್ನಿಸಿರುವನೆಂದು ಅಥವಾ ಅವರ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು, ಕಂಡುಬಂದಲ್ಲಿ ಅವನು / ಅವಳು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ; ಹುದ್ದೆಯ ಮೂಲ ದಾಖಲಾತಿ ಪರಿಶೀಲನಾ/ಆಯ್ಕೆಯಿಂದ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

**ಸಹಿ/–**

**ಸದಸ್ಯ ಕಾರ್ಯದರ್ಶಿ,**

ವಿಶೇಷ ನೇಮಕಾತಿ ಸಮಿತಿ ಹಾಗೂ

ಮುಖ್ಯ ಆಡಳಿತಾಧಿಕಾರಿಗಳು

ಆರೋಗ್ಯ ಮತ್ತು ಕು.ಕ.ಸೇವೆಗಳು

## ಅನುಬಂಧ–1

**(ಪ.ಜಾ. / ಪ.ಪಂ.ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ – ಡಿ**

(ನಿಯಮ 3ಎ(2) (3) ನ್ನು ನೋಡಿ)

**ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳಿಗೆ ಸೇರಿದ ಅಭ್ಯರ್ಥಿಗಳಿಗೆ ನೀಡುವ ಪ್ರಮಾಣ ಪತ್ರಗಳ ನಮೂನೆ.**

**ಪ್ರಮಾಣ ಪತ್ರ**

__________ ರಾಜ್ಯದ / ಕೇಂದ್ರಡಳಿತ ಪ್ರದೇಶದ * __________ ಜಿಲ್ಲೆಯ / ವಿಭಾಗದ __________ಗ್ರಾಮ / ಪಟ್ಟಣ * ನಿವಾಸಿಯಾದ ಶ್ರೀ / ಶ್ರೀಮತಿ _________ ಎಂಬುವವರ ಮಗ / ಮಗಳಾದ ಶ್ರೀ / ಶ್ರೀಮತಿ ______ಇವರು ಅನುಸೂಚಿತ ಜಾತಿ / ಅನುಸೂಚಿತ ಬುಡಕಟ್ಟು * ಎಂದು ಮಾನ್ಯ ಮಾಡಲಾಗಿರುವ ಜಾತಿ / ಬುಡಕಟ್ಟಿಗೆ * ಸೇರಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

- ಸಂವಿಧಾನ (ಅನುಸೂಚಿತ ಜಾತಿಗಳು) ಆದೇಶ, 1950
- ಸಂವಿಧಾನ ( ಅನುಸೂಚಿತ ಬುಡಕಟ್ಟುಗಳು) ಆದೇಶ 1950
- ಸಂವಿಧಾನ (ಅನುಸೂಚಿತ ಜಾತಿ) (ಕೇಂದ್ರಾಡಳಿತ ಪ್ರದೇಶಗಳು) ಆದೇಶ,1950.
- ಸಂವಿಧಾನ ( ಅನುಸೂಚಿತ ಬುಡಕಟ್ಟುಗಳು) (ಕೇಂದ್ರಾಡಳಿತ ಪ್ರದೇಶಗಳು) ಆದೇಶ, 1951

(ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ ಪಟ್ಟಿ (ಮಾರ್ಪಾಡು) ಆದೇಶ 1956 , ಮುಂಬಾಯಿ ರಾಜ್ಯ, ಪುನರ್ ರಚನಾ ಅಧಿನಿಯಮ, 1960, ಪಂಜಾಬ್ ರಾಜ್ಯ ಪುನರ್ ರಚನಾ ಅಧಿನಿಯಮ, 1966, ಹಿಮಾಚಲ ಪ್ರದೇಶ ರಾಜ್ಯ ಅಧಿನಿಯಮ 1970 ಮತ್ತು ಈಶಾನ್ಯ ಪ್ರದೇಶಗಳ (ಪುನರ್ ರಚನಾ ಅಧಿನಿಯಮ, 1971 ರ ಮೂಲಕ ತಿದ್ದುಪಡಿಯಾದಂತೆ).

- ಸಂವಿಧಾನ (ಜಮ್ಮು ಮತ್ತು ಕಾಶ್ಮೀರ) ಅನುಸೂಚಿತ ಜಾತಿಗಳ ಆದೇಶ 1956.
- ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ (ತಿದ್ದುಪಡಿ) ಅಧಿನಿಯಮ, 1976 ರ ಮೂಲಕ ತಿದ್ದುಪಡಿಯಾದಂತೆ ಸಂವಿಧಾನ (ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳ) ಅನುಸೂಚಿತ ಬುಡಕಟ್ಟು ಆದೇಶ 1959.
- ಸಂವಿಧಾನ (ದಾದರ್ ಮತ್ತು ನಗರ ಹವೇಲಿ ) ಅನುಸೂಚಿತ ಜಾತಿಗಳ ಆದೇಶ, 1962.
- ಸಂವಿಧಾನ (ಪಾಂಡಿಚೆರಿ) ಅನುಸೂಚಿತ ಜಾತಿಗಳ ಆದೇಶ, 1964.
- ಸಂವಿಧಾನ ಅನುಸೂಚಿತ ಬುಡಕಟ್ಟುಗಳ (ಉತ್ತರ ಪ್ರದೇಶ) ಅದೇಶ1967.
- ಸಂವಿಧಾನ (ಗೋವಾ , ದಮನ್ ಮತ್ತು ದೀವ್) ಅನುಸೂಚಿತ ಜಾತಿ / ಬುಡಕಟ್ಟುಗಳ ಆದೇಶ,1988.
- ಸಂವಿಧಾನ (ನಾಗಲ್ಯಾಂಡ್) ಅನುಸೂಚಿತ ಬುಡಕಟ್ಟುಗಳ ಆದೇಶ

1. ಶ್ರೀ/ ಶ್ರೀಮತಿ ಕುಮಾರಿ * _________________ ಮತ್ತು / ಅಥವಾ ಅವನ*/ಅವಳ* ಕುಟುಂಬವು ________ರಾಜ್ಯ/ಕೇಂದ್ರಾಡಳಿತ ಪ್ರದೇಶದ ________ ಜಿಲ್ಲಾ / ವಿಭಾಗದ * ________ಗ್ರಾಮ / _________ ಪಟ್ಟಣದ ಸಾಮಾನ್ಯ ನಿವಾಸಿ (ಗಳು).

**ಸಹಿ:**

**ತಹಶೀಲ್ದಾರ್**

ಸ್ಥಳ :

ದಿನಾಂಕ :

ಪದನಾಮ

ಕಛೇರಿಯ ಮೊಹರಿನೊಂದಿಗೆ

ರಾಜ್ಯ / ಕೇಂದ್ರಾಡಳಿತ ಪ್ರದೇಶ *

ಅನ್ವಯವಾಗದಿರುವ ಪದಗಳನ್ನು ದಯವಿಟ್ಟು ಬಿಟ್ಟುಬಿಡಿ / ಹೊಡೆದು ಹಾಕಿ,

ಸೂಚನೆ: – ಇಲ್ಲಿ ಉಪಯೋಗಿಸಿದ " ಸಾಮಾನ್ಯ ನಿವಾಸಿಗಳು" ಎಂಬ ಪದಾವಳಿಯು ಪ್ರಜಾ ಪ್ರಾತಿನಿಧ್ಯ ಅಧಿನಿಯಮ, 1950 ರ 20 ನೇ ಪ್ರಕರಣದಲ್ಲಿರುವ ಅರ್ಥವನ್ನೇ ಹೊಂದಿರುತ್ತವೆ.

ಭಾರತ ಸರ್ಕಾರದ ಪತ್ರ ಸಂಖ್ಯೆ : ಬಿಸಿ 12028/2/78 ಎಸ್ ಸಿಟಿ ಗೃಹ ಮಂತ್ರಾಲಯದ ಅನುಸಾರವಾಗಿ, ಅಂಥ ಪ್ರಮಾಣ ಪತ್ರಗಳನ್ನು ನೀಡಲು ಸಕ್ಷಮವಾಗಿರುವುದಕ್ಕಾಗಿ, ಭಾರತ ಸರ್ಕಾರದ (ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ) ಪತ್ರ ಸಂಖ್ಯೆ: 13/02/1974 ಇಎಸ್ ಟಿ) ದಿನಾಂಕ 5ನೇ ಆಗಸ್ಟ್ 1975 ರಲ್ಲಿ ನಮೂದಿಸಿದ ಪ್ರಾಧಿಕಾರಿಯು, ರಾಷ್ಟ್ರಪತಿಗಳು ಸಂಬಂಧಪಟ್ಟ ಆದೇಶದ ಅಧಿಸೂಚನೆಯನ್ನು ಹೊರಡಿಸಿದ ಸಮಯದಲ್ಲಿ ಪ್ರಮಾಣ ಪತ್ರಕ್ಕಾಗಿ ಅರ್ಜಿ ಸಲ್ಲಿಸಿದ ವ್ಯಕ್ತಿಯು, ತನ್ನ ಖಾಯಂ ವಾಸ ಸ್ಥಳವನ್ನು ಹೊಂದಿದ್ದ ಸ್ಥಳಕ್ಕೆ ಸೇರಿದವರೊಬ್ಬರಾಗಿರತಕ್ಕದ್ದು, ಅದೇ ರೀತಿಯಲ್ಲಿ, ಒಂದು ತಾಲ್ಲೂಕಿನ ರೆವಿನ್ಯೂ ಪ್ರಾಧಿಕಾರಿಯು ಇನ್ನೊಂದು ತಾಲ್ಲೂಕಿಗೆ ಸೇರಿದ ವ್ಯಕ್ತಿಗಳಿಗೆ ಸಂಬಂಧಪಟ್ಟ ಪ್ರಮಾಣ ಪತ್ರವನ್ನು ನೀಡಲು ಸಕ್ಷಮ ಪ್ರಾಧಿಕಾರಿಯಾಗುವುದಿಲ್ಲ.

**ಅನುಬಂಧ–2**

**ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 96 ಸೇನನಿ 2005, ದಿನಾಂಕ 10–08–2005**

**ನಮೂನೆ–2**

**ಗ್ರಾಮೀಣ ಅಭ್ಯರ್ಥಿ ಪ್ರಮಾಣ ಪತ್ರ**

ಶ್ರೀ/ಶ್ರೀಮತಿ________________ರವರ ಮಗ/ಮಗಳು/ಪತಿ/ಪತ್ನಿ ಶ್ರೀ/ಶ್ರೀಮತಿ ಕುಮಾರಿ __________ ಜಿಲ್ಲೆ ______________ತಾಲ್ಲೂಕು ____________ಗ್ರಾಮದಲ್ಲಿ ________ವಾಸವಾಗಿರುವ ಇವರು ಒಂದನೇ ತರಗತಿಯಿಂದ ________ ತರಗತಿಯವರೆಗೆ _____ ಜಿಲ್ಲೆ ____ ತಾಲ್ಲೂಕು _______ ಪಟ್ಟಣ ಶಾಲೆಯಲ್ಲಿ ವ್ಯಾಸಂಗ ಮಾಡಿ ______ ವರ್ಷ ನಡೆದ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಈ ಶಾಲೆಯು ಅಭ್ಯರ್ಥಿಯು ವ್ಯಾಸಂಗ ಮಾಡಿದ ಅವಧಿಯಲ್ಲಿ ಕರ್ನಾಟಕದ ಪೌರನಿಗಮಗಳ ಅಧಿನಿಯಮ, 1976 ಅಥವಾ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಅಡಿಯಲ್ಲಿ ನಿರ್ದಿಷ್ಟಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶಗಳ ಹೊರತಾದ ಪ್ರದೇಶದಲ್ಲಿತ್ತು.

ಸಹಿ/–
ಮುಖ್ಯೋಪಾಧ್ಯಾಯರು.
ಮೇಲುರುಜು
ಕ್ಷೇತ್ರ ಶಿಕ್ಷಣ ಅಧಿಕಾರಿ

---

**ಅನುಬಂಧ–3**

**ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರ**

ಶ್ರೀ/ಶ್ರೀಮತಿ____________________________ ರವರ ಮಗ/ಮಗಳು/ಪತ್ನಿ ಶ್ರೀ/ ಶ್ರೀಮತಿ ಕುಮಾರಿ ________________ಜಿಲ್ಲೆ ____________ ತಾಲ್ಲೂಕು ____ ಗ್ರಾಮದಲ್ಲಿ ____________ವಾಸವಾಗಿರುವ ಇವರು ____________ತರಗತಿಯಿಂದ ___________ತರಗತಿಯವರೆಗೆ __________ಶೈಕ್ಷಣಿಕ ವರ್ಷದಿಂದ ________ ಶೈಕ್ಷಣಿಕ ವರ್ಷದವರೆಗೆ _______________ ಶಾಲೆಯಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆಂದೂ ಪ್ರಮಾಣೀಕರಿಸಲಾಗಿದೆ.

**ಮುಖ್ಯೋಪಾಧ್ಯಾರ ಸಹಿ ಮತ್ತು ಸಂಸ್ಥೆಯ ಮೊಹರು.**

ದಿನಾಂಕ: __________

ಸ್ಥಳ :___________

**<u>ಸೂಚನೆ</u> :** – ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚಿನ ಶಾಲೆಗಳಲ್ಲಿ ವ್ಯಾಸಂಗ ಮಾಡಿದ್ದಲ್ಲಿ ಶಾಲಾವಾರು ಪ್ರತ್ಯೇಕ ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರ ಸಲ್ಲಿಸಬೇಕು.

**ಅನುಬಂಧ–4**

**ಕರ್ನಾಟಕ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 115 ಸೆನೆನಿ 2005, ದಿನಾಂಕ 19–11–2005**

**CERTIFICATE FOR THE PERSONS WITH DISABILITIES**

This is to certify that Sri/ Smt / Kum………………………………………… Son / wife/ Daughter of Shri .............................. Age........... old, male / female, Registration No................ is a case of ..................................................... He / She is physically disabled / visual disabled / speech & hearing disabled and has ........ % ......... percent) permanent(Physical impairment/ visual impairment speech & hearing impairment) in relation to his / her....... .........................

Note:

1. This condition is progressive / non progressive likely to improve / not likely to improve.
2. Re-assessment is not recommended / is recommended after a period of ................ months / years.

* Strike out which is not applicable

Recent attested
Photograph showing
the disability
affixed here)

| | | |
|---|---|---|
| Sd/ | Sd/ | Sd/ |
| DOCTOR | DOCTOR | DOCTOR |
| (Seal) | (Seal) | (Seal) |

Countersigned by the
Medical Superintendent CMO Head of
Hospital (with seal)

Signature/Thumb impression
of the disabled person.

Explanation:-As per Notification No. DPAR 50 SRR 2000 dated 03-09-2005 " Physically Handicapped candidates " or " person with disability " means a person suffering from not less than forty percent of any of the following disabilities :- (1) Blindness (2) Low Vision (3) Hearing impairment (4) Locomotor disability (5) Leprosy cured (6) Mental retardation (7) Mental illness.

(1) Blindness refers to a condition where a person suffers from any of the following conditions, namely:- (a)Total absence of sight; or (b) Visual acuity not exceeding 6/60 or 20/200 (Snellen) in the better eye with correcting lenses; or (c) limitation of the field of vision subtending an angle of 20 degree or worse;

(2) Person with low vision means a person with impairment of visual functioning even after treatment or standard refractive correction, but who uses or is potentially capable of using vision for the planning or execution of a task with appropriate assistive device;

(3)" Hearing impairment" means loss of sixty decibels or more in the better ear in the conversational range of frequencies.

(4)" Locomotor disability" means disability of the bones, joints or muscles leading to substantial restriction of the movement of the limbs or any form of cerebral palsy.

(5) Leprosy cured:-means any person who has been cured of Leprosy, but is suffering from, (i) Loss of sensation in hands or feet as wellas loss of sensation & paresis in the eye & eyelid, but with no manifest deformity;(ii)manifest deformity & paresis but having sufficient mobility in their hands & feet to enable them to engage in normal economic activity; (iii) extreme physical deformity

as well as advanced age which prevents him from undertaking any gainful occupation; and the expressesion " Leprosy cured " shall be construed accordingly;

(6) Mental Retardation:-means a condition of arrested or incomplete development of mind of a person who is specially characterised by sub normality of intelligence;

(7) Mental Illness:- means any mental disorder other than mental retardation.

---

**ಅನುಬಂಧ–5**

**ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 23 ಎಸ್‌ಆರ್‌ಆರ್ 99, ದಿನಾಂಕ: 23–11–2000**

**ನಮೂನೆ**

**ಯೋಜನೆಗಳಿಂದ ನಿರ್ವಸಿತರಾದ ಕುಟುಂಬದ ಅಭ್ಯರ್ಥಿ**

**ಪ್ರಮಾಣ ಪತ್ರ**

ಶ್ರೀ/ಶ್ರೀಮತಿ ––––––––––––––– ಎಂಬುವವರ ಮಗ/ಮಗಳು/ಪತಿ/ಪತ್ನಿ ಶ್ರೀ/ಶ್ರೀಮತಿ/ ಕುಮಾರಿ ––––––– ಜಿಲ್ಲೆ –––––––––––––– ತಾಲ್ಲೂಕು ––––––––– ಗ್ರಾಮದಲ್ಲಿ ––––––––– ವಾಸವಾಗಿರುವ ಇವರು : ;ಇವರ ಕುಟುಂಬದವರು ಅವಲಂಬಿತರಾಗಿದ್ದ ಈ ಕೆಳಕಂಡ ಆಸ್ತಿಯನ್ನು ––––––––––––––– ಯೋಜನೆಗಾಗಿ ––––––––––––––––ಇಸವಿ–––––––––––ಯಂದು ಸ್ವಾಧೀನಪಡಿಸಿಕೊಳ್ಳಲಾಗಿದೆ. ಎಂದು ಈ ಮೂಲಕ ಪ್ರಮಾಣೀಕರಿಸಿದೆ:–

- ವಾಸಿಸುವ ಮನೆ ಮತ್ತು ತಾವು ಅವಲಂಬಿತರಾಗಿದ್ದ ಅವರ ಕೃಷಿ ಭೂಮಿಯ ಅರ್ಧದಷ್ಟು:
- ಯೋಜನೆಗೆ ಮೊದಲು ಭೂಮಿಯನ್ನು ಹೊಂದಿರದೆ : ಯೋಜನೆಯಿಂದ ತಾವು ವಾಸಿಸುವ ಮನೆ:
- ತಾವು ಅವಲಂಭಿತರಾಗಿದ್ದ ತಮ್ಮ ಕೃಷಿ ಭೂಮಿಯ ಅರ್ಧದಷ್ಟು ಅಥವಾ ಅದಕ್ಕಿಂತ ಕಡಿಮೆ ಕೃಷಿ ಭೂಮಿ:
- ಇತರ ಇನ್ನಾವುದೇ ಪ್ರಕರಣದಲ್ಲಿ ಯೋಜನೆಯಿಂದ ನಿರ್ವಸಿತರಾದವರು

ತಹಸೀಲ್ದಾರ್
–––––––––ತಾಲ್ಲೂಕು

(ಅನ್ವಯವಾಗುವ ಐಟಂನ್ನು ಮಾತ್ರ ಪ್ರಮಾಣ ಪತ್ರದಲ್ಲಿ ನಮೂದಿಸತಕ್ಕದ್ದು.)

**ಅನುಬಂಧ–6**

**ರಾಜ್ಯ ಸರ್ಕಾರಿ/ ಕೇಂದ್ರ ಸರ್ಕಾರಿ ನೌಕರರು ಒದಗಿಸಬೇಕಾದ ಪ್ರಮಾಣ ಪತ್ರ**

ಶ್ರೀ / ಶ್ರೀಮತಿ.......................................................................... ರವರು ರಾಜ್ಯ / ಕೇಂದ್ರ ಸರ್ಕಾರದಲ್ಲಿ ......................................... (ಪದನಾಮ) ............................................................................................ ಇಲಾಖೆಯಲ್ಲಿ ಖಾಯಂ / ತಾತ್ಕಾಲಿಕ ಹುದ್ದೆಯನ್ನು ದಿನಾಂಕ ............................. ರಿಂದ .......................................... ರವರೆಗೆ ಹೊಂದಿರುವರು.. ಈ ಹುದ್ದೆಗೆ ಇವರು ನೇಮಕಾತಿ ನಿಯಮಗಳಡಿ ಆಯ್ಕೆಯಾಗಿದ್ದು, ಸದರಿ ಹುದ್ದೆಗೆ ಅರ್ಜಿ ಸಲ್ಲಿಸಲು ಅವರಿಗೆ ಅನುಮತಿ ನೀಡಲಾಗಿದೆ.

ಸ್ಥಳ :
ದಿನಾಂಕ:

ನೇಮಕಾತಿ ಪ್ರಾಧಿಕಾರದ ಸಹಿ/
ಇಲಾಖೆಯ ಹೆಸರು ಮತ್ತು ಮೊಹರಿನೊಂದಿಗೆ

## CERTIFICATE TO BE FURNISHED BY THE STATE/CENTRAL GOVT. SERVANTS

Certified that Sri / Smt ……………………………………………….holds a permanent / temporary post under the State/Central Govt. as ……………………… (Designation) in the dept. of ………………………from…………………………having been appointed therein under the rules of recruitment. He /She is permitted to apply for the said post.

Place :
Date :

Signature of the appointing authority
of the department / with name and seal.

**ರಾಜ್ಯ ಮಟ್ಟದ ಆಯ್ಕೆ ಸಮಿತಿ**

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಆನಂದರಾವ್ ವೃತ್ತ, ಬೆಂಗಳೂರು–560 009.**

**ಕುಷ್ಠರೋಗದಿಂದ ಗುಣಮುಖ ಹೊಂದಿದ ಅಭ್ಯರ್ಥಿಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ 'ಡಿ' ಗುಂಪಿನ ಹುದ್ದೆಗಳಿಗೆ ನೇಮಕಾತಿಗಾಗಿ ಆಯ್ಕೆ ಮಾಡುವ ಬಗ್ಗೆ.**

**ಅಧಿಸೂಚನೆ**

**ಅಧಿಸೂಚನೆ ಸಂಖ್ಯೆ: ಎಸ್‌ಎಲ್‌ಆರ್‌ಸಿ/49/2011–12, ದಿನಾಂಕ:29.03.2012**

**ಅರ್ಜಿಗಳನ್ನು ಆನ್–ಲೈನ್ ಮೂಲಕ ಸಲ್ಲಿಸಲು ಕೊನೆಯ ದಿನಾಂಕ.30.04.2012**

**ಬ್ಯಾಂಕ್‌ನಲ್ಲಿ ಅರ್ಜಿ ಶುಲ್ಕ ಪಾವತಿಸಲು ಕೊನೆಯ ದಿನಾಂಕ:02.05.2012**

ಸರ್ಕಾರದ ಆದೇಶ ಸಂಖ್ಯೆ:ಆಕುಕ/239/ಹೆಚ್‌ಎಸ್‌ಎಂ/2010, ದಿ:12.10.2011 ಮತ್ತು ಸರ್ಕಾರ ಅಧಿಸೂಚನೆ ಸಂಖ್ಯೆ:ಆಕುಕ/278/ಹೆಚ್‌ಎಸ್‌ಎಂ/2011, ದಿನಾಂಕ:27.12.2011, ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್/24/ಎಸ್‌ಆರ್‌ಡಿ/2002, ದಿನಾಂಕ:25.07.2002ರಲ್ಲಿ ಜಾರಿಗೆ ಬಂದ ಕರ್ನಾಟಕ ಜನಾರೋಗ್ಯ ಸೇವೆಗಳು(ನೇಮಕಾತಿ) (ತಿದ್ದುಪಡಿ) ನಿಯಮಗಳು 2002ರ ಪ್ರಕಾರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ರೂ.4800–7275ರ ವೇತನ ಶ್ರೇಣಿಯಲ್ಲಿ 100 ಗ್ರೂಪ್'ಡಿ ಹುದ್ದೆಗಳಿಗೆ ಕುಷ್ಠರೋಗದಿಂದ ಗುಣಮುಖ ಹೊಂದಿದ ಅಭ್ಯರ್ಥಿಗಳಿಂದ ವೆಬ್‌ಸೈಟ್ ವಿಳಾಸ www.karhfw.gov.in ನಲ್ಲಿ ON-LINE ಮೂಲಕ ಅರ್ಜಿಗಳನ್ನು ಆಹ್ವಾನಿಸಿದೆ.

**ಗ್ರೂಪ್'ಡಿ ಹುದ್ದೆಗಳು–100(ವರ್ಗೀಕರಣ)**

| ಪ್ರವರ್ಗ | ಸಾಮಾನ್ಯ | ಮಹಿಳಾ | ಗ್ರಾಮೀಣ | ಮಾಜಿ ಸೈನಿಕ | ಕನ್ನಡ ಮಾಧ್ಯಮ | ಅಂಗವಿಕಲ | ಯೋಜನಾ ಸಂತ್ರಸ್ತರು | ಒಟ್ಟು |
|---|---|---|---|---|---|---|---|---|
| ಸಾ.ಅರ್ಹತೆ | 10 | 15 | 13 | 5 | 2 | 3 | 2 | 50 |
| ಪ.ಜಾತಿ | 3 | 5 | 4 | 1 | 1 | 1 | 0 | 15 |
| ಪ.ಪಂ | 1 | 1 | 1 | 0 | 0 | 0 | 0 | 3 |
| ಪ್ರವರ್ಗ–I | 1 | 1 | 1 | 0 | 0 | 1 | 0 | 4 |
| ಪ್ರವರ್ಗ–II(ಎ) | 3 | 5 | 4 | 1 | 1 | 1 | 0 | 15 |
| ಪ್ರವರ್ಗ–II(ಬಿ) | 1 | 1 | 1 | 0 | 0 | 1 | 0 | 4 |
| ಪ್ರವರ್ಗ–III(ಎ) | 1 | 1 | 1 | 0 | 0 | 1 | 0 | 4 |
| ಪ್ರವರ್ಗ–III(ಬಿ) | 1 | 2 | 1 | 0 | 0 | 1 | 0 | 5 |
| **ಒಟ್ಟು** | **21** | **31** | **26** | **7** | **4** | **9** | **2** | **100** |

**ಟಿಪ್ಪಣಿ:** ಪ್ರಕಟಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಸಮಿತಿಯ ನಿರ್ಣಯಕ್ಕೆ ಒಳಪಟ್ಟಿರುತ್ತದೆ.

1. **ಶುಲ್ಕ ಪಾವತಿಸಬೇಕಾದ ವಿಧಾನ:–**

| | |
|---|---|
| ಸಾಮಾನ್ಯ ಅರ್ಹತೆ, ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಗೆ ಸೇರಿದ ಅಭ್ಯರ್ಥಿಗಳಿಗೆ | **ರೂ. 50/–** |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1 | **ರೂ. 25/–** |

2. **ಅರ್ಹತಾ ಷರತ್ತುಗಳು:–**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

ಇ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

ಈ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ಸಮಿತಿಯು ಕಾದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ. ಅಂಗವಿಕಲರು ಯಾವುದೇ ಹುದ್ದೆಗೆ ನಿಗದಿಪಡಿಸಿದ ಕರ್ತವ್ಯ ಜವಾಬ್ದಾರಿಯನ್ನು ನಿರ್ವಹಿಸಲು ದೈಹಿಕವಾಗಿ ಸಮರ್ಥರೇ ಎಂಬುದನ್ನು ನೇಮಕಾತಿ ಸಮಿತಿ ಪರಿಶೀಲಿಸಿ ದೃಢೀಕರಿಸಿದ ನಂತರವೇ ಅಭ್ಯರ್ಥಿಯ ಆಯ್ಕೆಯನ್ನು ಪರಿಗಣಿಸಲಾಗುವುದು.

ಉ) ಅಂಗವಿಕಲತೆ ಪ್ರವರ್ಗದಲ್ಲಿ ಮೀಸಲಾತಿ ಬಯಸುವ ಅಭ್ಯರ್ಥಿಗಳು ಕುಷ್ಠರೋಗದಿಂದ ಬಳಲಿದ ಗ್ರೇಡ್–2 ಅಂಗವಿಕಲತೆ ಬಗ್ಗೆ ಅಭ್ಯರ್ಥಿ ಚಿಕಿತ್ಸೆ ಪಡೆದ ವೈದ್ಯಾಧಿಕಾರಿಗಳಿಂದ ಅಂದರೆ ನಮೂನೆ–6ರಲ್ಲಿ ತಿಳಿಸಿರುವಂತೆ ಆಸ್ಪತ್ರೆ ಅಧೀಕ್ಷಕರು/ಇಲಾಖೆಯ ಮುಖ್ಯಸ್ಥರ /ಜಿಲ್ಲಾ ಕುಷ್ಠರೋಗ ನಿವಾರಣಾ ಅಧಿಕಾರಿ, ಇವರಿಂದ ದೃಢೀಕರಿಸಿ ಪಡೆದ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು, ಇಲ್ಲವಾದಲ್ಲಿ ತತ್ಸಂಬಂಧ ಮೀಸಲಾತಿಗೆ ಅರ್ಹರಾಗುವುದಿಲ್ಲ.(ಅನುಬಂಧ–1).

**ಗ್ರೇಡ್–2 ಅಂಗವಿಕಲತೆಯ ನ್ಯೂನತೆಗಳನ್ನು ಈ ಕೆಳಕಂಡಂತೆ ವಿವರಿಸಿದೆ.**

**Grade 2 means that visible damage or disability in noted**

For the eyes, this includes the inability to close the eye fully or obvious redness of the eye (in leprosy, this is typically caused by either a corneal ulcer or by uveitis); visual impairment or blindness also gives a disability grade of 2.

For the hands and feet, visible damage includes wounds and ulcers, as well as deformity due to muscle weakness, such as a foot drop, or a claw hand. Loss of tissue, such as the loss or partial reabsorption of fingers or toes is a late sign in leprosy, but it also gives a disability grade of 2 for that hand or foot.

**ಟಿಪ್ಪಣಿ:** ಈ ಅಧಿಸೂಚನೆಯಲ್ಲಿ ಹುದ್ದೆಗಳಿಗೆ ಯಾವುದೇ ಶೈಕ್ಷಣಿಕ ವಿದ್ಯಾರ್ಹತೆಯನ್ನು ನಿಗದಿಪಡಿಸಿಲ್ಲ. ಆದರೆ ಯಾವುದೇ/ಹೆಚ್ಚಿನ ವಿದ್ಯಾರ್ಹತೆ ಹೊಂದಿರುವ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದಿಲ್ಲ (ಕುಷ್ಠರೋಗದಿಂದ ಬಳಲಿ ಗ್ರೇಡ್–2ರ ಕೊರತೆ ಹೊಂದಿದವರು ಮಾತ್ರ ಅರ್ಜಿ ಸಲ್ಲಿಸತಕ್ಕದ್ದು).

3. **ಆಯ್ಕೆ ವಿಧಾನ:–** ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್/24/ಎಸ್‌ಆರ್‌ಡಿ/2002, ದಿನಾಂಕ:25.07.2002ರಲ್ಲಿ ಜಾರಿಗೆ ಬಂದ ಕರ್ನಾಟಕ ಜನಾರೋಗ್ಯ ಸೇವೆಗಳು(ನೇಮಕಾತಿ) (ತಿದ್ದುಪಡಿ) ನಿಯಮಗಳು 2002ರಲ್ಲಿ ಸೂಚಿಸಿದಂತೆ ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು.

4. **ವಯೋಮಿತಿ:–** ಈ ಕೆಳಕಂಡಂತೆ ಅರ್ಜಿಗಳನ್ನು ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಗಳು ಕನಿಷ್ಠ ವಯೋಮಿತಿಯನ್ನು ಹೊಂದಿರಬೇಕು ಹಾಗೂ ನಿಗದಿತ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು.

| ಪ್ರವರ್ಗ | ಕನಿಷ್ಠ | ಗರಿಷ್ಠ |
|---|---|---|
| ಸಾ.ಅ | 18 | 35 |
| ಪ್ರ–2ಎ | 18 | 38 |
| ಪ್ರ–2ಬಿ | 18 | 38 |

